1

## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 326
ಸದಸ್ಯರ ಹೆಸರು : ಶ್ರೀ ಸಿ.ಎಂ ಇಬ್ರಾಹಿಂ
ಉತ್ತರಿಸುವ ದಿನಾಂಕ : 18-02-2022
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹಾಲುಗಲ್ಲದ ಕಂದಮ್ಮಗಳನ್ನು ಭಿಕ್ಷಾಟನೆಗೆ ಬಳಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ರಾಜ್ಯದಲ್ಲಿ ಎಷ್ಟು ಪ್ರಕರಣಗಳನ್ನು ಪತ್ತೆ ಮಾಡಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು) | ಬಂದಿದೆ.<br><br>ಕರ್ನಾಟಕ ಭಿಕ್ಷಾಟನಾ ನಿಷೇದ ಅಧಿನಿಯಮ 1975 ರ ಪ್ರಕಾರ ರಾಜ್ಯದಲ್ಲಿ ಜಾರಿಯಲ್ಲಿದೆ. ಸದರಿ ಅಧಿನಿಯಮದನ್ವಯ ಭಿಕ್ಷಾಟನೆಯಲ್ಲಿ ತೊಡಗಿರುವ 16 ವರ್ಷಗಳ ಮೇಲ್ಪಟ್ಟ ಹುಡುಗ ಅಥವಾ 18 ವರ್ಷಗಳ ಮೇಲ್ಪಟ್ಟ ಹುಡುಗಿಯರನ್ನು ಬಂಧಿಸಿ ನಿಯಮಾನುಸಾರ ತಾಲ್ಲೂಕು ಪರಿಹಾರ ಕೇಂದ್ರಗಳ ರಕ್ಷಣೆಯಲ್ಲಿಡಲಾಗುತಿದೆ.<br><br>ಸದರಿ ಅಧಿನಿಯಮ ಸೆಕ್ಷನ್ 2(4) ರಲ್ಲಿ 16 ವರ್ಷ ತುಂಬಿರದ ಹುಡುಗ ಅಥವಾ 18 ವರ್ಷ ತುಂಬಿರದ ಹುಡುಗಿಯರನ್ನು ಮಗು ಎಂದು ಪರಿಗಣಿಸಲಾಗುವುದರಿಂದ, ಮಕ್ಕಳನ್ನು ಬಂಧಿಸಲು ಅಧಿನಿಯಮದಲ್ಲಿ ಅವಕಾಶ ಇರುವುದಿಲ್ಲ.<br><br>ಆದಾಗ್ಯೂ ಭಿಕ್ಷಾಟನೆಯಲ್ಲಿ ಮಕ್ಕಳೊಂದಿಗೆ ತೊಡಗಿರುವ ತಾಯಿ ಮತ್ತು ಮಗುವನ್ನು ಬಂಧಿಸಿ ನಿಯಮಾನುಸಾರ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ವಶಕ್ಕೆ ನೀಡಲಾಗುತಿದೆ. ಜಿಲ್ಲಾ ಮಕ್ಕಳ ರಕ್ಷಣಾ ಘಟಕಗಳಿಂದ ಭಿಕ್ಷಾಟನೆಯಲ್ಲಿ ತೊಡಗಿರುವ ವಿವಿಧ ವಯೋಮಾನದ ಮಕ್ಕಳನ್ನು ರಕ್ಷಿಸಿದ್ದು ಜಿಲ್ಲಾ ಮಾಹಿತಿಯನ್ನು **ಅನುಬಂಧದಲ್ಲಿ** ನೀಡಿದೆ. |
| ಆ) | ಮಕ್ಕಳನ್ನು ದಿನದ ಬಾಡಿಗೆ ಪಡೆದು ಭಿಕ್ಷಾಟನೆಗೆ ಇಳಿಯುವ ಯುವತಿಯರು, ಮಹಿಳೆಯರು ಹಸುಗೂಸುಗಳಿಗೆ ನಿದ್ರೆ ಮಾತ್ರೆ ಅಥವಾ ಇಂಜೆಕ್ಷನ್ ನೀಡಿ ಮಲಗಿಸಿ ಭಿಕ್ಷಾಟನೆಗೆ ದೂಡುತ್ತಿರುವ ಕೃತ್ಯಗಳನ್ನು ತಡೆಗಟ್ಟುವ ನಿಟ್ಟಿನಲ್ಲಿ ಸರ್ಕಾರ ಇದುವರೆಗೂ ಯಾವ ಕ್ರಮ ತೆಗೆದುಕೊಂಡಿದೆ; (ಸಂಪೂರ್ಣ ಮಾಹಿತಿ ನೀಡುವುದು) | • Karnataka Prohibition of Beggary Act 1975 ರಡಿ ಭಿಕ್ಷಾಟನೆಯಲ್ಲಿ ತೊಡಗಿರುವ 18 ವರ್ಷ ಮೇಲ್ಪಟ್ಟ ಮಹಿಳೆಯರನ್ನು ರಕ್ಷಿಸಿ ಸಮಾಜ ಕಲ್ಯಾಣ ಇಲಾಖೆಯಡಿ ಪುನರ್ವಸತಿಯನ್ನು ಕಲ್ಪಿಸಬೇಕಾಗಿರುತ್ತದೆ.<br>• ಭಿಕ್ಷಾಟನೆಯಲ್ಲಿ ತೊಡಗಿರುವ ಮಹಿಳೆಯರೊಂದಿಗೆ 06 ವರ್ಷದೊಳಗಿನ ಮಗುವಿದ್ದಲ್ಲಿ ಅಂತಹ ಮಹಿಳೆಯರನ್ನು ರಕ್ಷಿಸಿ ಮಗುವಿನ ಜೊತೆಗೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸ್ವೀಕಾರ ಕೇಂದ್ರದಲ್ಲಿ ಪುನರ್ವಸತಿಯನ್ನು ಕಲ್ಪಿಸಲಾಗುತ್ತಿದೆ.<br>• ಮುಂದುವರೆದು 06 ವರ್ಷ ಮೇಲ್ಪಟ್ಟ ಮಕ್ಕಳಿದ್ದಲ್ಲಿ ಇಂತಹ ಮಕ್ಕಳನ್ನು ಬಾಲ ನ್ಯಾಯ (ಮಕ್ಕಳ ಪಾಲನೆ ಮತ್ತು ರಕ್ಷಣೆ) ಕಾಯ್ದೆ 2015 ರನ್ವಯ ಮಕಳ ಕಲಾಣ ಸಮಿತಿಯ ಮುಂದೆ |

| | | |
|---|---|---|
| ಇ) | ಈ ರೀತಿಯ ಪ್ರಕರಣಗಳನ್ನು ಕೈಗೊಳ್ಳುವ ಯುವತಿಯರು ಮತ್ತು ಮಹಿಳೆಯರ ಮನಪರಿವರ್ತನೆ ಮಾಡುವ ಮತ್ತು ಅವರ ಜೀವನೋಪಾಯಗಳಿಗೆ ಏನಾದರೂ ಯೋಜನೆಗಳನ್ನು ರೂಪಿಸಲಾಗಿದೆಯೇ? | ಹಾಜರುಪಡಿಸಿ ಸದರಿ ಸಮಿತಿಯ ನಿರ್ದೇಶನದಂತೆ ಮಕ್ಕಳ ವಯಸ್ಸಿನ ಅನುಗುಣವಾಗಿ ಮಕ್ಕಳ ಪಾಲನಾ ಕೇಂದ್ರಗಳಲ್ಲಿ ಆಶ್ರಯ ಕಲ್ಪಿಸಿರುವುದರೊಂದಿಗೆ ಪುನರ್ವಸತಿಯನ್ನು ನೀಡಲಾಗುತ್ತಿದೆ.<br>• ಭಿಕ್ಷಾಟನೆಗೆ ಒಳಪಟ್ಟ ಮಕ್ಕಳನ್ನು ಕ್ಷೇತ್ರಮಟ್ಟದಲ್ಲಿ ರಕ್ಷಿಸಿಲು ಎನ್‌ಸಿಪಿಸಿಆರ್ ರವರು ಸಿದ್ಧಪಡಿಸಿರುವ ನಿರ್ದಿಷ್ಟ ಮಾರ್ಗಸೂಚಿಯನ್ನು ಮಕ್ಕಳ ರಕ್ಷಣಾ ನಿರ್ದೇಶನಾಯಲದಿಂದ ಎಲ್ಲಾ ಜಿಲ್ಲಾ ಮಕ್ಕಳ ರಕ್ಷಣಾಧಿಕಾರಿಗಳಿಗೆ ಮಾಹಿತಿಗಾಗಿ ನೀಡಿದ್ದು, ಅದರಂತೆ ಕ್ರಮವಹಿಸಲು ತಿಳಿಸಲಾಗಿರುತ್ತದೆ.<br>• ಮಕ್ಕಳ ಭಿಕ್ಷಾಟನೆ ಎಂಬ ಸಾಮಾಜಿಕ ಪಿಡುಗನ್ನು ಕೇವಲ ಮಕ್ಕಳಿಗೆ ಮಾತ್ರ ಸಂಬಂಧಪಟ್ಟ ಸಮಸ್ಯೆಯಾಗಿರುವುದಿಲ್ಲ. ಅಲ್ಲದೇ ಮಕ್ಕಳು ಯಾವ ಕುಟುಂಬಕ್ಕೆ ಸೇರಿರುತಾರೋ ಆ ಕುಟುಂಬದ ಪರಿಸ್ಥಿತಿಯನ್ನು ಸುಧಾರಿಸದ ಹೊರತು ಈ ಸಮಸ್ಯೆ ಬಗೆಹರಿಸುವುದು ಸಾಧ್ಯವಾಗುವುದಿಲ್ಲ. ಈ ಹಿನ್ನೆಲೆಯಲ್ಲಿ ಕಮ್ಯೂನಿಟಿ ಬೇಸಡ್ ರೀಹಾಬಿಲಿಟೇಷನ್ ಆಫ್ ಚಿಲ್ಡ್ರನ್ ಪ್ರಸ್ತಾವನೆಯನ್ನು ಅನುಷ್ಠಾನಗೊಳಿಸಲು ಕ್ರಮವಹಿಸಲಾಗುತ್ತಿದೆ.<br>• ಮಕ್ಕಳ ರಕ್ಷಣಾ ನಿರ್ದೇಶನಾಲಯದಿಂದ ಭಿಕ್ಷಾಟನೆಯಿಂದ ರಕ್ಷಿಸಲ್ಪಟ್ಟ ಮಕ್ಕಳ ಪೋಷಕರಿಗೆ ಮಕ್ಕಳನ್ನು ಭಿಕ್ಷಾಟನೆಗೆ ತೊಡಗಿಸುವುದರಿಂದ ಆಗುವ ದುಷ್ಪರಿಣಾಮಗಳ ಕುರಿತು ಆಪ್ತ ಸಮಾಲೋಚನೆ ಹಾಗೂ ಅರಿವುಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ ಇದಲ್ಲದೇ ಮಕ್ಕಳಿಗೆ ಭಿಕ್ಷೆ ನೀಡುವುದನ್ನು ಪ್ರೋತ್ಸಾಹಿಸದಿರಲು ಸಾರ್ವಜನಿಕರಿಗೆ ಅರಿವು ಮೂಡಿಸಲು ಬಿತ್ತಿ ಪತ್ರ, ಪೋಸ್ಟರ್ಸ್ ಹಾಗೂ ಕಿರು ಚಿತ್ರಗಳನ್ನು ನಿರ್ಮಿಸಿ ಪ್ರಚಾರ ಮಾಡಲಾಗುತ್ತಿದೆ.<br>• ಭಿಕ್ಷಾಟನೆಯಲ್ಲಿ ತೊಡಗಿರುವ ಯುವತಿಯರಿಗೆ ಮತ್ತು ಮಹಿಳೆಯರಿಗೆ ಸಮಾಜ ಕಲ್ಯಾಣ ಇಲಾಖೆಯಿಂದ ನಿರಾಶ್ರಿತ ಕೇಂದ್ರದಲ್ಲಿ ವಿವಿಧ ಕೌಶಲ್ಯಾಭಿವೃದ್ಧಿಗಳಾದ ಹೈನುಗಾರಿಕೆ, ತೋಟಗಾರಿಕೆ, ಬುಟ್ಟಿ ಹೆಣೆಯುವುದು ಮುಂತಾದ ಉದ್ಯೋಗ ಆಧಾರಿತ ತರಬೇತಿ ನೀಡಿ ಪುನರ್ವಸತಿ ಕಲ್ಪಿಸಲಾಗುತ್ತಿದೆ. |

ಸಕಇ 10 ಎಸ್‌ಬಿಆರ್ 2022

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು



| ಅನುಬಂಧ<br>ವಿಧಾನ ಪರಿಷತ್ತಿನ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:326ರ ಮಾಹಿತಿ | | |
|---|---|---|
| 1 | 2 | 3 |
| Sl.No | District | Total no of children identified in street situtaion (as on 31.01.2022) |
| 1 | BAGALKOT | 60 |
| 2 | BALLARI | 61 |
| 3 | BELAGAVI | 62 |
| 4 | BENGALURU RURAL | 63 |
| 5 | BENGALURU URBAN | 93 |
| 6 | BIDAR | 111 |
| 7 | CHAMARAJANAGAR A | 20 |
| 8 | CHIKBALLAPUR | 32 |
| 9 | CHIKKAMAGALURU | 52 |
| 10 | CHITRADURGA | 53 |
| 11 | DAKSHIN KANNADA | 29 |
| 12 | DAVANGERE | 93 |
| 13 | DHARWAD | 55 |
| 14 | GADAG | 14 |
| 15 | HASSAN | 32 |
| 16 | HAVERI | 76 |
| 17 | KALABURAGI | 22 |
| 18 | KODAGU | 1 |
| 19 | KOLAR | 50 |
| 20 | KOPPAL | 41 |
| 21 | MANDYA | 16 |
| 22 | MYSURU | 109 |
| 23 | RAICHURU | 24 |
| 24 | RAMANAGARA | 71 |
| 25 | SHIVAMOGGA | 20 |
| 26 | TUMAKURU | 50 |
| 27 | UDUPI | 17 |
| 28 | UTTARA KANNADA | 28 |
| 29 | VIJAYAPURA | 88 |
| 30 | YADGIR | 72 |
| Total | | 1515 |

(April)